# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 102(100)

ಮಾನ್ಯ ಸದಸ್ಯರ ಹೆಸರು : ಶ್ರೀ. ಎಂ. ನಾರಾಯಣಸ್ವಾಮಿ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 01.02.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಇಂಜಿನಿಯರಿಂಗ್ ಕಾಲೇಜು ಮತ್ತು ಅನುದಾನಿತ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದೆ (ಸಂಪೂರ್ಣ ವಿವರ ನೀಡುವುದು) | 2019–20ನೇ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 208 ಹಗಲು, 5 ಸಂಜೆ ಹಾಗೂ 35 ಬಿ.ಆರ್ಕ್ ಇಂಜಿನಿಯರಿಂಗ್ ಕಾಲೇಜುಗಳು ಅಸ್ಥಿತ್ವದಲ್ಲಿದ್ದು, ಇವುಗಳಲ್ಲಿ 9 ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ. ವಿವರಗಳು ಈ ಕೆಳಕಂಡಂತಿವೆ. |

| ಇಂಜಿನಿಯರಿಂಗ್ ಕಾಲೇಜು | ಹಗಲು | ಸಂಜೆ | ಬಿ.ಆರ್ಕ್ |
|---|---|---|---|
| ಸರ್ಕಾರಿ | 13 | 1 | – |
| ವಿಶ್ವವಿದ್ಯಾಲಯಗಳು (ಸರ್ಕಾರಿ) | 2 | 1 | 1 |
| ಖಾಸಗಿ ಅನುದಾನಿತ | 9 | 2 | – |
| ಖಾಸಗಿ ಅಲ್ಪಸಂಖ್ಯಾತ | 17 | – | 1 |
| ಖಾಸಗಿ ಅನುದಾನ ರಹಿತ | 143 | 1 | 31 |
| ಖಾಸಗಿ/ಡೀಮ್ಡ್ ವಿಶ್ವವಿದ್ಯಾಲಯಗಳು | 17 | – | 2 |
| 02ನೇ ಪಾಳೀಯ ಕಾಲೇಜು | 07 | – | – |
| **ಒಟ್ಟು** | 208 | 5 | 35 |

**ಒಟ್ಟಾರೆ 208+5+35=248**

ಆ) ಪ್ರತಿ ಶೈಕ್ಷಣಿಕ ವರ್ಷದಲ್ಲಿ ಆಡಳಿತ ಮಂಡಳಿಗೆ ಎಷ್ಟು ಸಿ.ಇ.ಟಿ. ಕಾಮೆಡ್-ಕೆ ಸೀಟುಗಳನ್ನು ಹಂಚಲಾಗುತ್ತಿದೆ: ಕಳೆದ 3 ವರ್ಷಗಳಲ್ಲಿ ಲಭ್ಯವಿದ್ದ ಸಿ.ಇ.ಟಿ ಕಾಮೆಡ್-ಕೆ ವಿಭಾಗಕ್ಕೆ ಎಷ್ಟು ಸೀಟುಗಳನ್ನು ಭರ್ತಿ ಮಾಡಲಾಗಿದೆ: (ಸಂಪೂರ್ಣ ವಿವರ ನೀಡುವುದು)

ಪ್ರತಿ ಶೈಕ್ಷಣಿಕ ವರ್ಷದಲ್ಲಿ ಆಡಳಿತ ಮಂಡಳಿಗೆ ಹಂಚಿಕೆಯಾಗುವ ಸಿ.ಇ.ಟಿ, ಕಾಮೆಡ್-ಕೆ ಸೀಟುಗಳ ಕುರಿತಂತೆ ರಾಜ್ಯದ ಸರ್ಕಾರಿ/ಅನುದಾನಿತ ಇಂಜಿನಿಯರಿಂಗ್ ಮತ್ತು ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಶುಲ್ಕಗಳನ್ನು ಮತ್ತು ಸೀಟು ಹಂಚಿಕೆ ಪ್ರಮಾಣವನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿರುತ್ತದೆ.

| ಕ್ರ.ಸಂ | ಕಾಲೇಜುಗಳು | ಸೀಟು ಹಂಚಿಕೆ |
|---|---|---|
| 01 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳು | ಶೇ.100% ಸರ್ಕಾರಿ ಸೀಟುಗಳು |
| 02 | ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳು | ಶೇ.95% ಸರ್ಕಾರಿ ಸೀಟುಗಳು |
| | | ಶೇ.5% ಆಡಳಿತ ಮಂಡಳಿ ಸೀಟುಗಳು |
| 03 | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳು (ಅಲ್ಪಸಂಖ್ಯಾತವಲ್ಲದ ಸಂಸ್ಥೆಗಳು) | ಶೇ.45% ಸರ್ಕಾರಿ ಸೀಟುಗಳು |
| | | ಶೇ.30% ಕಾಮೆಡ್-ಕೆ ಸೀಟುಗಳು |
| | | ಶೇ.25% ಆಡಳಿತ ಮಂಡಳಿ ಸೀಟುಗಳು |
| 04 | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳು (ಅಲ್ಪಸಂಖ್ಯಾತ ಸಂಸ್ಥೆಗಳು) | ಶೇ.40% ಸರ್ಕಾರಿ ಸೀಟುಗಳು |
| | | ಶೇ.30% ಕೆ.ಆರ್.ಎಲ್.ಎಂ ಸೀಟುಗಳು |
| | | ಶೇ.30% ಆಡಳಿತ ಮಂಡಳಿ ಸೀಟುಗಳು |

ಕಳೆದ ಮೂರು ವರ್ಷಗಳಲ್ಲಿ ಲಭ್ಯವಿದ್ದ ಸಿ.ಇ.ಟಿ ಮತ್ತು ಕಾಮೆಡ್-ಕೆ ವಿಭಾಗಕ್ಕೆ ಭರ್ತಿ ಮಾಡಲಾಗಿರುವ ಸೀಟುಗಳ ವಿವರವು ಈ ಕೆಳಕಂಡಂತಿರುತ್ತದೆ.

ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು:

| ವರ್ಷ | ಒಟ್ಟು ಇಂಟೆಕ್ | ಸಿಇಟಿ ಇಂಟೇಕ್ (100% ಸೀಟುಗಳು) | ಸಿಇಟಿ ಪ್ರವೇಶ | ಸಿಇಟಿಯಲ್ಲಿ ಭರ್ತಿ ಆಗದ ಉಳಿಕೆ ಸೀಟುಗಳು |
|---|---|---|---|---|
| 2017-18 | 2450 | 2428 | 1875 | 553 |
| 2018-19 | 2430 | 2428 | 2099 | 329 |
| 2019-20 | 3296 | 3294 | 1545 | 1749 |

ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಅನುದಾನಿತ ಕೋರ್ಸ್‌ಗಳ ಸೀಟುಗಳು:

| ವರ್ಷ | ಒಟ್ಟು ಇಂಟೇಕ್ | ಸಿಇಟಿ ಇಂಟೇಕ್ (95% ಸೀಟುಗಳು | ಸಿಇಟಿ ಪ್ರವೇಶ | ಸಿಇಟಿಯಲ್ಲಿ ಭರ್ತಿ ಆಗದ ಉಳಿಕೆ ಸೀಟುಗಳು | ಆಡಳಿತ ಮಂಡಳಿ ಇಂಟೇಕ್ (5% ಸೀಟುಗಳು) | ಒಟ್ಟು ಆಡಳಿತ ಮಂಡಳಿ ಸೀಟುಗಳು (e+f) | ಆಡಳಿತ ಮಂಡಳಿ ಪ್ರವೇಶ (ಸಿಇಟಿ ಉಳಿಕೆ ಸೀಟುಗಳು ಸೇರಿ) | ಭರ್ತಿ ಆಗದ ಉಳಿಕೆ ಒಟ್ಟು ಸೀಟುಗಳು |
|---|---|---|---|---|---|---|---|---|
| (a) | (b) | ( c) | (d) | (e) | (f) | (g) | (h) | (i) |
| 2017–18 | 3800 | 3354 | 3001 | 353 | 167 | 520 | 214 | 306 |
| 2018–19 | 3530 | 3354 | 2966 | 388 | 176 | 564 | 202 | 362 |
| 2019–20 | 3530 | 3354 | 2938 | 416 | 176 | 592 | 168 | 424 |

ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಅನುದಾನ ರಹಿತ ಕೋರ್ಸ್‌ಗಳ ಸೀಟುಗಳು:

| ವರ್ಷ | ಒಟ್ಟು ಇಂಟೇಕ್ | ಸಿಇಟಿ ಇಂಟೇಕ್ (45% ಸೀಟುಗಳು | ಪ್ರವೇಶ | ಸಿಇಟಿಯಲ್ಲಿ ಭರ್ತಿ ಆಗದ ಉಳಿಕೆ ಸೀಟುಗಳು | ಕಾಮೆಡ್-ಕೆ ಇಂಟೇಕ್ (30% ಸೀಟುಗಳು) | ಪ್ರವೇಶ | ಕಾಮೆಡ್-ಕೆಯಲ್ಲಿ ಭರ್ತಿ ಆಗದ ಉಳಿಕೆ ಸೀಟುಗಳು) | ಆಡಳಿತ ಮಂಡಳಿ ಇಂಟೇಕ್ (25% ಸೀಟುಗಳು) | ಒಟ್ಟು ಆಡಳಿತ ಮಂಡಳಿ ಸೀಟುಗಳು (e+h+i) | ಆಡಳಿತ ಮಂಡಳಿ ಪ್ರವೇಶ (ಸಿಇಟಿ & ಕಾಮೆಡ್-ಕೆ ಉಳಿಕೆ ಸೀಟುಗಳು ಸೇರಿ) | ಭರ್ತಿ ಆಗದ ಉಳಿಕೆ ಒಟ್ಟು ಸೀಟುಗಳು |
|---|---|---|---|---|---|---|---|---|---|---|---|
| (a) | (b) | ( c) | (d) | (e) | (f) | (g) | (h) | (i) | (j) | (k) | (l) |
| 2017–18 | 3210 | 1306 | 1201 | 105 | 870 | 279 | 591 | 724 | 1420 | 983 | 437 |
| 2018–19 | 3420 | 1540 | 1290 | 250 | 1026 | 475 | 551 | 854 | 1655 | 1206 | 449 |
| 2019–20 | 3870 | 1742 | 1498 | 244 | 1161 | 513 | 648 | 967 | 1859 | 1258 | 601 |

ಇ) ಕಳೆದ 5 ವರ್ಷಗಳಲ್ಲಿ ಸಿ.ಇ.ಟಿ ಕಾಮೆಡ್-ಕೆ ಅಡಿಯಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಎಷ್ಟು ಬಾರಿ ಪ್ರವೇಶ ಶುಲ್ಕವನ್ನು ನವೀಕರಿಸಿದೆ ಹಾಗೂ ಎಷ್ಟು ಶುಲ್ಕವನ್ನು ಹೆಚ್ಚಿಸಲಾಗಿದೆ ಹಾಗೂ ಸರ್ಕಾರ ಕೈಗೊಂಡ ಮಾನದಂಡಗಳೇನು ಒಬ್ಬ ವಿದ್ಯಾರ್ಥಿಗೆ ಸರ್ಕಾರ ವ್ಯಯ ಮಾಡಿದ ಮೊತ್ತವೆಷ್ಟು (ಸಂಪೂರ್ಣ ವಿವಿರ ನೀಡುವುದು)

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗಧಿ) ತಿದ್ದುಪಡಿ ಅಧಿನಿಯಮ, 2015ರಲ್ಲಿನ ಪ್ರಕರಣ 4(ಎ) ಮತ್ತು 4(ಬಿ) ರಲ್ಲಿ ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗಧಿಯ ಸಂಬಂಧವಾಗಿ ಸರ್ಕಾರವು, ಖಾಸಗಿ ವೃತ್ತಿಪರ ಶಿಕ್ಷಣ ಸಂಸ್ಥೆಗಳ ಒಕ್ಕೂಟ/ಪ್ರತಿನಿಧಿಗಳೊಂದಿಗೆ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ/ಒಡಂಬಡಿಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ, ಪ್ರತಿ ವರ್ಷವೂ ಸರ್ಕಾರ ಮತ್ತು ಖಾಸಗಿ ವೃತ್ತಿಪರ ಶಿಕ್ಷಣ ಸಂಸ್ಥೆಗಳ ನಡುವೆ ಏರ್ಪಡುವ ಸಮ್ಮತಾಭಿಪ್ರಾಯ ಒಪ್ಪಂದದಂತೆ ಇಂಜಿನಿಯರಿಂಗ್ ಕಾಲೇಜುಗಳಿಗೆ ಶುಲ್ಕ ನಿಗಧಿ ಮತ್ತು ಸೀಟು ಹಂಚಿಕೆಯನ್ನು ನಿಗಧಿ ಪಡಿಸಿ ಸರ್ಕಾರವು ಆದೇಶಿಸಿರುತ್ತದೆ. ಕಳೆದ 5 ವರ್ಷಗಳ ಶುಲ್ಕ ನಿಗಧಿ ವಿವರವು ಈ ಕೆಳಕಂಡಂತೆ ಇರುತ್ತದೆ.

| ವರ್ಷ | ಸರ್ಕಾರಿ ಕಾಲೇಜುಗಳಿಗೆ | ಅನುದಾನಿತ ಕಾಲೇಜುಗಳಿಗೆ | | ಖಾಸಗಿ ಅನುದಾನ ರಹಿತ ಕಾಲೇಜುಗಳಿಗೆ (ಅಲ್ಪಸಂಖ್ಯಾತವಲ್ಲದ ಸಂಸ್ಥೆಗಳು) | | | ಖಾಸಗಿ ಅನುದಾನ ರಹಿತ ಕಾಲೇಜುಗಳಿಗೆ (ಅಲ್ಪಸಂಖ್ಯಾತ ಸಂಸ್ಥೆಗಳು) | | |
|---|---|---|---|---|---|---|---|---|---|
| | | ಸರ್ಕಾರಿ | ಆಡಳಿತ ಮಂಡಳಿ | ಸರ್ಕಾರಿ | ಕಾಮೆಡ್-ಕೆ | ಆಡಳಿತ ಮಂಡಳಿ | ಸರ್ಕಾರಿ | ಕೆ.ಆರ್.ಎಲ್.ಎಂ | ಆಡಳಿತ ಮಂಡಳಿ |
| 2016-17 | ರೂ.18,090/- | ರೂ.18,090/- | ಸಮ್ಮತಾಭಿಪ್ರಾಯ ಒಪ್ಪಂದದಂತೆ | ರೂ.49,500/- ಅಥವಾ ರೂ.55,000/- | ರೂ.1,21,000/- ಅಥವಾ ರೂ.1,70,000/-ಗಳ ಮಿತಿಗೊಳಪಟ್ಟು | ಸಮ್ಮತಾಭಿಪ್ರಾಯ ಒಪ್ಪಂದದಂತೆ | ರೂ.49,500/- ಅಥವಾ ರೂ.55,000/- | ರೂ.1,21,000/- ಅಥವಾ ರೂ.1,70,000/-ಗಳ ಮಿತಿಗೊಳಪಟ್ಟು | ಸಮ್ಮತಾಭಿಪ್ರಾಯ ಒಪ್ಪಂದದಂತೆ |
| 2017-18 | ರೂ.18,090/- | ರೂ.18,090/- | | ರೂ.49,500/- ಅಥವಾ ರೂ.55,000/- | ರೂ.1,21,000/- ಅಥವಾ ರೂ.1,70,000/-ಗಳ ಮಿತಿಗೊಳಪಟ್ಟು | | ರೂ.49,500/- ಅಥವಾ ರೂ.55,000/- | ರೂ.1,21,000/- ಅಥವಾ ರೂ.1,70,000/-ಗಳ ಮಿತಿಗೊಳಪಟ್ಟು | |
| 2018-19 | ರೂ.19,090/- | ರೂ.19,090/- | | ರೂ.53,460/- ಅಥವಾ ರೂ.59,400/- | ರೂ.1,30,680/- ಅಥವಾ ರೂ.1,83,600/-ಗಳ ಮಿತಿಗೊಳಪಟ್ಟು | | ರೂ.53,460/- ಅಥವಾ ರೂ.59,400/- | ರೂ.1,30,680/- ಅಥವಾ ರೂ.1,83,600/-ಗಳ ಮಿತಿಗೊಳಪಟ್ಟು | |
| 2019-20 | ರೂ.19,090/- | ರೂ.19,090/- | | ರೂ.58,806/- ಅಥವಾ ರೂ.65,340/- | ರೂ.1,43,748/- ಅಥವಾ 2,01,960/-ಗಳ ಮಿತಿಗೊಳಪಟ್ಟು | | ರೂ.58,806/- ಅಥವಾ ರೂ.65,340/- | ರೂ.1,43,748/- ಅಥವಾ ರೂ.2,01,960/-ಗಳ ಮಿತಿಗೊಳಪಟ್ಟು | |
| 2020-21 | ರೂ.19,090/- | ರೂ.19,090/- | | ರೂ.58,806/- ಅಥವಾ ರೂ.65,340/- | ರೂ.1,43,748/- ಅಥವಾ 2,01,960/-ಗಳ ಮಿತಿಗೊಳಪಟ್ಟು | | ರೂ.58,806/- ಅಥವಾ ರೂ.65,340/- | ರೂ.1,43,748/- ಅಥವಾ ರೂ.2,01,960/-ಗಳ ಮಿತಿಗೊಳಪಟ್ಟು | |

| | | |
|---|---|---|
| | | • ಕಳೆದ 05 ವರ್ಷಗಳಲ್ಲಿ ಸರ್ಕಾರಿ/ಅನುದಾನಿತ ಇಂಜಿನಿಯರಿಂಗ್ (ಅನುದಾನಿತ ಕೋರ್ಸುಗಳು) ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳಿಗೆ 01 ಬಾರಿ ಶುಲ್ಕವನ್ನು ಹೆಚ್ಚಿಸಲಾಗಿದ್ದು, ಹೆಚ್ಚುವರಿಯಾಗಿ ಶುಲ್ಕ ರೂ.1,000/- ಆಗಿರುತ್ತದೆ.<br>• ಕಳೆದ 05 ವರ್ಷಗಳಲ್ಲಿ ಖಾಸಗಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳಿಗೆ 02 ಬಾರಿ ಶುಲ್ಕವನ್ನು ಹೆಚ್ಚಿಸಲಾಗಿರುತ್ತದೆ. 2018-19ನೇ ಸಾಲಿನಲ್ಲಿ ಹೆಚ್ಚುವರಿಯಾಗಿ ರೂ.3,960/- ಅಥವಾ ರೂ.4,400/- ಆಗಿರುತ್ತದೆ ಮತ್ತು 2019-20ನೇ ಸಾಲಿನಲ್ಲಿ ಹೆಚ್ಚುವರಿಯಾಗಿ ರೂ.5,346/- ಅಥವಾ ರೂ.5,940/- ಆಗಿರುತ್ತದೆ.<br>• ಕಳೆದ 05 ವರ್ಷಗಳಲ್ಲಿ ಖಾಸಗಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಾಮೆಡ್-ಕೆ/ಕೆ.ಆರ್.ಎಲ್.ಎಂ ಸೀಟುಗಳಿಗೆ 02 ಬಾರಿ ಶುಲ್ಕವನ್ನು ಹೆಚ್ಚಿಸಲಾಗಿರುತ್ತದೆ. 2018-19ನೇ ಸಾಲಿನಲ್ಲಿ ಹೆಚ್ಚುವರಿಯಾಗಿ ರೂ.9,680/- ಅಥವಾ ರೂ.13,600/- ಆಗಿರುತ್ತದೆ ಮತ್ತು 2019-20ನೇ ಸಾಲಿನಲ್ಲಿ ಹೆಚ್ಚುವರಿಯಾಗಿ ರೂ.13,068/- ಅಥವಾ ರೂ.18,360/- ಆಗಿರುತ್ತದೆ.<br><br>ಒಂದು ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ 04 ಕೋರ್ಸುಗಳಲ್ಲಿ ಪ್ರತಿ ಕೋರ್ಸಿಗೆ 60 ವಿದ್ಯಾರ್ಥಿಗಳಂತೆ ಒಂದು ಶೈಕ್ಷಣಿಕ ಸಾಲಿಗೆ ಒಟ್ಟು 960 ವಿದ್ಯಾರ್ಥಿಗಳೆಂದು ಪರಿಗಣಿಸಿದ್ದಲ್ಲಿ, ಕಟ್ಟಡ, ಯಂತ್ರೋಪಕರಣ, ಪೀಠೋಪಕರಣ, ಪುಸ್ತಕ, ಬೋಧಕ ಸಿಬ್ಬಂದಿಗಳ ವೇತನ (7ನೇ ವೇತನ ಶ್ರೇಣಿ), ಬೋಧಕೇತರ/ಆಡಳಿತ ಸಿಬ್ಬಂದಿಗಳ ವೇತನ ಹಾಗೂ ಆಡಳಿತಾತ್ಮಕ ವೆಚ್ಚಗಳನ್ನು ಪರಿಗಣಿಸಿದ್ದಲ್ಲಿ, ಒಂದು ವಿದ್ಯಾರ್ಥಿಗೆ ಸರ್ಕಾರವು ಅಂದಾಜು ರೂ.30,000/- ಗಳನ್ನು ವ್ಯಯ ಮಾಡಿದಂತಾಗುತ್ತದೆ. |
| ಈ) | ಸದರಿ ಇಂಜಿನಿಯರಿಂಗ್ ಕಾಲೇಜುಗಳ ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರಿಗೆ ವಿಶ್ವವಿದ್ಯಾಲಯವು ಯಾವ ರೀತಿ ಶಿಕ್ಷಣ ತರಬೇತಿ ನಿಗಧಿ ಪಡಿಸಿರುತ್ತದೆ ಸಂಪೂರ್ಣ ವಿವರ ನೀಡುವುದು. | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಧೀನದಲ್ಲಿರುವ ಕಾಲೇಜುಗಳ ಸಹಾಯಕ ಪ್ರಾಧ್ಯಾಪಕರು ಹಾಗೂ ಸಹ ಪ್ರಾಧ್ಯಾಪಕರುಗಳಿಗೆ ವಿಶ್ವವಿದ್ಯಾಲಯವು ಎ.ಐ.ಸಿ.ಟಿ.ಇ, ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆ ಹಾಗೂ ಇನ್ನಿತರೆ ಸರ್ಕಾರದ ಸಂಯೋಜಿತ ಸಂಸ್ಥೆಗಳಿಂದ ನಡೆಸಲ್ಪಡುವ Short term Training Programme (S.T.T.P)/Faculty Development Programme (F.D.P)/Teachers Orientation Programme ಗಳನ್ನು ನಿಗಧಿಪಡಿಸಲಾಗಿದ್ದು 05 ವರ್ಷದೊಳಗಿನ ಶಿಕ್ಷಕ ವೃತ್ತಿ ಅನುಭವ ಹೊಂದಿರುವ ಎಲ್ಲಾ ಸಹಾಯಕ ಪ್ರಾಧ್ಯಾಪಕರುಗಳಿಗೆ ಕೇಂದ್ರ ಸರ್ಕಾರದ ಉನ್ನತ ಶಿಕ್ಷಣ ಇಲಾಖೆ ಮತ್ತು ಎ.ಐ.ಸಿ.ಟಿ.ಇ ಸಹಯೋಗದೊಂದಿಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಮುದ್ದೇನಹಳ್ಳಿ ಕ್ಯಾಂಪಸ್‌ನಲ್ಲಿ ಎಲ್ಲಾ ಇಂಜಿನಿಯರಿಂಗ್ ಬೋಧಕ ಕಾಲೇಜುಗಳ ಬೋಧಕ ಸಿಬ್ಬಂದಿಗೆ FDP ಕಾರ್ಯಕ್ರಮವನ್ನು ಪ್ರತಿ ವರ್ಷವೂ ಹಮ್ಮಿಕೊಳ್ಳಲಾಗುತ್ತಿದೆ. |

ಇಡಿ 16 ಟಿಇಸಿ 2021

(ಡಾ॥ ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು,
(ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ).